

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | 1934 |
| **ಸದಸ್ಯರ ಹೆಸರು** | : | ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| **ಉತ್ತರಿಸುವ ದಿನಾಂಕ** | : | 16.03.2022. |
| **ಉತ್ತರಿಸುವ ಸಚಿವರು** | : | ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಉಡುಪಿ ಜಿಲ್ಲೆಯ ಮಲ್ಪೆಯ ಕಡಲ ತೀರದಲ್ಲಿ ಐಷಾರಾಮಿ ದೋಣಿಗಳ ನಿಲುಗಡೆಗಾಗಿ ಯಾಚ್ ಯಾರ್ಡ್‌ನ್ನು ನಿರ್ಮಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಕುರಿತು ಸರ್ಕಾರದ ನಿಲುವೇನು; | ಹೌದು.<br>ಉಡುಪಿ ಜಿಲ್ಲೆಯ ಮಲ್ಪೆಯ ಕಡಲ ತೀರದಲ್ಲಿ ರೂ.304.17 ಕೋಟಿ ವೆಚ್ಚದಲ್ಲಿ ಮರಿನಾ ಹಾಗೂ ವಿವಿಧೋದ್ದೇಶ ಬಂದರು ನಿರ್ಮಾಣಕ್ಕಾಗಿ ವಿಸ್ತೃತ ಯೋಜನಾ ವರದಿಯನ್ನು ಕೇಂದ್ರ ಸರ್ಕಾರದ ಸಾಗರಮಾಲಾ ಕೋಶಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗಿದೆ. ಈ ಯೋಜನೆಗೆ ಅನುಮೋದನೆ ದೊರಕಿದ ಬಳಿಕ ಮುಂದಿನ ಕ್ರಮ ಕೈಗೊಳ್ಳಲಾಗುವುದು. |
| (ಆ) | ಐಷಾರಾಮಿ ದೋಣಿಗಳ ನಿಲುಗಡೆಗೆ ಅವಕಾಶ ಮಾಡಿಕೊಡುತ್ತಿರುವುದರಿಂದ ಪರಿಸರ ಮೀನುಗಾರಿಕೆಗೆ ತೊಂದರೆಯಾಗುತ್ತಿರುವ ಕುರಿತು ಸರ್ಕಾರದ ನಿಲುವೇನು; | ಸದರಿ ಯೋಜನೆಯಡಿ ದೇಶೀಯ ಹಾಗೂ ವಿದೇಶಿಯ ಬೋಟ್‌ಗಳಿಗೆ ಮತ್ತು ಯಾಚ್‌ಗಳಿಗೆ ತಂಗಲು ತೇಲುವ ಪಾಂಟುನ್‌ಗಳು, ಬ್ರೇಕ್‌ವಾಟರ್, ಹೂಳೆತ್ತುವಿಕೆ ಹಾಗೂ ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಪ್ರಸ್ತಾಪಿಸಲಾಗಿದೆ. ಉದ್ದೇಶಿತ ಯೋಜನೆಯು ಪ್ರಸ್ತುತ ಮೀನುಗಾರಿಕೆ ಬಂದರಿನಿಂದ ದಕ್ಷಿಣಕ್ಕೆ ಇರುವುದರಿಂದ ಮೀನುಗಾರಿಕೆಗೆ ಯಾವುದೇ ತೊಂದರೆಯಾಗುವುದಿಲ್ಲ. ಇದರಿಂದ ಪರಿಸರಕ್ಕೆ ತೊಂದರೆಯುಂಟಾಗುವ ಬಗ್ಗೆ ಪರಿಸರ ಅಧ್ಯಯನ ಕೈಗೊಳ್ಳಲಾಗುವುದು. |

| | | |
|---|---|---|
| (ಇ) | ಈ ಐಷಾರಾಮಿ ದೋಣಿಗಳ ನಿಲುಗಡೆ ನಿರ್ಮಾಣದಿಂದ ಸರ್ಕಾರಕ್ಕೆ ಆಗುತ್ತಿರುವ ಲಾಭವೇನು; ಇದರಿಂದ ಸೃಷ್ಟಿಯಾಗುವ ಉದ್ಯೋಗವಕಾಶಗಳ ಸಂಖ್ಯೆ ಎಷ್ಟು; | ಈ ಯೋಜನೆಯಿಂದ ಜಲಾಧಾರಿತ ಪ್ರವಾಸೋದ್ಯಮಕ್ಕೆ ಉತ್ತೇಜನ ನೀಡಿದಂತಾಗುವುದಲ್ಲದೆ ಪ್ರವಾಸೋದ್ಯಮ ಮತ್ತು ಇತರ ಪೂರಕ ಚಟುವಟಿಕೆಗಳಿಗೆ ಉಪಯೋಗವಾಗಲಿದೆ. ಇದು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಆರ್ಥಿಕ ಚಟುವಟಿಕೆಗಳ ಅಭಿವೃದ್ಧಿಗೆ ಸಹಕಾರಿಯಾಗಲಿದೆ. ಈ ಯೋಜನೆಯಿಂದ ನೇರವಾಗಿ ಸುಮಾರು 100 ಜನರಿಗೆ ಮತ್ತು ಪರೋಕ್ಷವಾಗಿ ಅಂದಾಜು 500 ಜನರಿಗೆ ಉದ್ಯೋಗಾವಕಾಶ ಸೃಷ್ಟಿಯಾಗಲಿದೆ. |
| (ಈ) | ಮೀನುಗಾರಿಕೆಯನ್ನೇ ಕುಲ ಕಸುಬು ಮಾಡಿಕೊಂಡಿರುವ ಎಷ್ಟು ಬೆಸ್ತರು ನಿರುದ್ಯೋಗಿಗಳಾಗುತ್ತಾರೆ; ಈ ಕುರಿತು ಸರ್ಕಾರದ ನಿಲುವೇನು? | ಈ ಯೋಜನೆಯಿಂದ ಮೀನುಗಾರಿಕಾ ಉದ್ಯೋಗಕ್ಕೆ ಯಾವುದೇ ತೊಂದರೆ ಉಂಟಾಗುವುದಿಲ್ಲ ಮತ್ತು ಮೀನುಗಾರಿಕೆಯನ್ನೇ ಕುಲ ಕಸುಬು ಮಾಡಿಕೊಂಡಿರುವ ಬೆಸ್ತರು ನಿರುದ್ಯೋಗಿಗಳಾಗುವುದಿಲ್ಲ. |

IDD 52 PSP 2022 (E-719709)

(ಎಸ್. ಅಂಗಾರ)
**ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು**